**ಕರಡು ನಿರ್ದೇಶನ**

1. ಯಾವುದೇ ವ್ಯಕ್ತಿ, ಅಂಗಡಿ ಮಾಲೀಕ, ಮಾರಾಟಗಾರ, ಸಗಟುಮಾರಾಟಗಾರ ಅಥವಾ ಚಿಲ್ಲರೆವ್ಯಾಪಾರಿ, ವ್ಯಾಪಾರಿ ಮತ್ತು ಮಾರಾಟಗಾರರು, ಯಾವುದೇ ದಪ್ಪದ ಯಾವುದೇ ರೀತಿಯ ಪ್ಲಾಸ್ಟಿಕ್ ಕ್ಯಾರಿಬ್ಯಾಗ್‌ಗಳು, ಭಿತ್ತಿಪತ್ರಗಳು, ತೋರಣಗಳು, ಫ್ಲೆಕ್ಸ್‌ಗಳು, ಪ್ಲಾಸ್ಟಿಕ್ ಬಾವುಟಗಳು, ಪ್ಲಾಸ್ಟಿಕ್ ತಟ್ಟೆಗಳು, ಪ್ಲಾಸ್ಟಿಕ್ ಲೋಟಗಳು, ಪ್ಲಾಸ್ಟಿಕ್ ಹಾಳೆಗಳನ್ನು (ಊಟದ ಮೇಜಿನ ಮೇಲೆ ಹರಡುವ) ಸಮಾರಂಭಗಳಲ್ಲಿ ಊಟೋಪಚಾರಕ್ಕೆ ಬಳಕೆ ಮಾಡುವುದನ್ನು ನಿಷೇಧಿಸಲಾಗಿದೆ. ಮುಂದುವರೆದು, ಯಾವುದೇ ಕೈಗಾರಿಕೆ ಅಥವಾ ವ್ಯಕ್ತಿ ಯಾವುದೇ ದಪ್ಪದ ಯಾವುದೇ ರೀತಿಯ ಪ್ಲಾಸ್ಟಿಕ್ ಕ್ಯಾರಿಬ್ಯಾಗ್‌ಗಳ, ಭಿತ್ತಿಪತ್ರಗಳ, ತೋರಣಗಳ, ಫ್ಲೆಕ್ಸ್‌ಗಳ, ಪ್ಲಾಸ್ಟಿಕ್ ಬಾವುಟಗಳ, ಪ್ಲಾಸ್ಟಿಕ್ ತಟ್ಟೆಗಳ, ಪ್ಲಾಸ್ಟಿಕ್ ಲೋಟಗಳ, ಪ್ಲಾಸ್ಟಿಕ್ ಹಾಳೆಗಳ (ಊಟದ ಮೇಜಿನ ಮೇಲೆ ಹರಡುವ) ತಯಾರಿಕೆ, ಸರಬರಾಜು, ಸಂಗ್ರಹಣೆ, ಸಾಗಾಣಿಕೆ, ಮಾರಾಟ ಮತ್ತು ವಿತರಣೆ ಮಾಡುವುದನ್ನು ನಿಷೇಧಿಸಿದೆ. ಈ ನಿರ್ದೇಶನವು ಅಧಿಸೂಚನೆಯಾಗಿ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನದಿಂದ ಜಾರಿಗೆ ಬರುತ್ತದೆ.

   ಅಧಿಕೃತವಾಗಿ ರಫ್ತು ಮಾಡುವ ಉದ್ದೇಶಕ್ಕೆಂದು ಹಾಗೂ ಕಾಯ್ದಿರಿಸಲಾದ ರಫ್ತು ಆರ್ಡರ್ ಮೇರೆಗೆ ಉತ್ಪಾದಿಸಲಾದ ಪ್ಲಾಸ್ಟಿಕ್ ಕ್ಯಾರಿಬ್ಯಾಗ್‌ಗಳ ತಯಾರಿಕೆಯನ್ನು ಪ್ಲಾಸ್ಟಿಕ್ ತ್ಯಾಜ್ಯ (ಬಳಕೆ ಮತ್ತು ನಿರ್ವಹಣೆ) ನಿಯಮಗಳು 2011ರ ನಿಯಮ 2ರನ್ವಯ, ಮೇಲಿನ ಅಧಿಸೂಚನೆಯು ಅನ್ವಯ ವಾಗುವುದಿಲ್ಲ. ಅಲ್ಲದೆ, ನರ್ಸರಿಗಳಲ್ಲಿ, ಡೈರಿ (ಹೈನು ಉತ್ಪನ್ನಗಳು), ಆರೋಗ್ಯ ಕ್ಷೇತ್ರ ಮುಂತಾದ ವಿಭಾಗಗಳಲ್ಲಿ ಉಪಯೋಗಿಸಲ್ಪಡುವ ಪ್ಲಾಸ್ಟಿಕ್ ಕೈಚೀಲ ಅಥವಾ ಪ್ಲಾಸ್ಟಿಕ್ ಉತ್ಪನ್ನಗಳನ್ನು ಉಪಭೋಗ್ಯಕ್ಕಲದೇ ಬಳಸುವುದನ್ನು ಸಹ ಈ ಅಧಿಸೂಚನೆಯಿಂದ ವಿನಾಯಿತಿ ನೀಡಲಾಗಿದೆ.

2. ಈ ನಿರ್ದೇಶನವನ್ನು ಕೆಳಗೆ ಪಟ್ಟಿಮಾಡಿರುವ ಅಧಿಕಾರಿಗಳಿಗೆ ನಿಯಮಾನುಸಾರ ಪ್ರದತ್ತವಾಗಿರುವ ಅಧಿಕಾರದಂತೆ ಜಾರಿಗೊಳಿಸಬಹುದಾಗಿರುತ್ತದೆ:
   - ಅ. ಆಯುಕ್ತರು, ಜಂಟಿ ಆಯುಕ್ತರುಗಳು, ಜಿಲ್ಲಾಧಿಕಾರಿಗಳು ಮತ್ತು ಬೃಹತ್ ಬೆಂಗಳೂರು ಮಹಾ ನಗರ ಪಾಲಿಕೆಯಡಿಯಲ್ಲಿನ ಎಲ್ಲಾ ಸಾರ್ವಜನಿಕ ಆರೋಗ್ಯಾಧಿಕಾರಿಗಳು.
   - ಆ. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು
   - ಇ. ರಾಜ್ಯದ ಎಲ್ಲಾ ಆಯುಕ್ತರು, ಮುಖ್ಯಾಧಿಕಾರಿಗಳು ಮತ್ತು ಆರೋಗ್ಯಾಧಿಕಾರಿಗಳು ಎಲ್ಲಾ ಸ್ಥಳೀಯ ಸಂಸ್ಥೆಗಳ ಸದಸ್ಯರು.
   - ಈ. ಎಲ್ಲಾ ಪ್ರಾದೇಶಿಕ ಅಧಿಕಾರಿಗಳು/ಕರ್ನಾಟಕ ರಾಜ್ಯ ಪರಿಸರ ಮಂಡಳಿಯ ಪರಿಸರ ಅಧಿಕಾರಿಗಳು.
   - ಉ. ಕಂದಾಯ ಇಲಾಖೆಯ ಎಲ್ಲಾ ಸಹಾಯಕ ಆಯುಕ್ತರುಗಳು.
   - ಊ. ಎಲ್ಲಾ ತಾಲ್ಲೂಕುಗಳ ತಹಶೀಲ್ದಾರರು.
   - ಋ. ವಾಣಿಜ್ಯ ತೆರಿಗೆ ಇಲಾಖೆಯ ಎಲ್ಲಾ ಅಧಿಕಾರಿಗಳು.
   - ೠ. ಆಹಾರ ಮತ್ತು ನಾಗರೀಕ ಪೂರೈಕೆ ಇಲಾಖೆಯ ಎಲ್ಲಾ ಅಧಿಕಾರಿಗಳು

3. ಈ ನಿರ್ದೇಶನವನ್ನು ಉಲ್ಲಂಘಿಸಿದ ಸಂದರ್ಭದಲ್ಲಿ ಕೆಳಕಂಡ ಅಧಿಕಾರಿಗಳು ಅಪರಾಧದ ಸ್ವರೂಪಕ್ಕೆ ಅನುಗುಣವಾಗಿ ಪರಿಸರ (ಸಂರಕ್ಷಣೆ) ಕಾಯಿದೆ, 1986ರ ಸೆಕ್ಷನ್ 19ರ ಅನ್ವಯ ಪ್ರದತ್ತವಾಗಿರುವ ಪರಮಾಧಿಕಾರದಂತೆ ಕಾನೂನುಕ್ರಮ ಜರುಗಿಸುವರು.
   - ಅ. ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.
   - ಆ. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು
   - ಇ. ಕಂದಾಯ ಇಲಾಖೆಯ ಎಲ್ಲಾ ಸಹಾಯಕ ಆಯುಕ್ತರುಗಳು.
   - ಈ. ಕರ್ನಾಟಕ ರಾಜ್ಯ ಪರಿಸರ ಮಂಡಳಿಯ ಅಧ್ಯಕ್ಷರು ಮತ್ತು ಸದಸ್ಯ ಕಾರ್ಯದರ್ಶಿಗಳು.
   - ಉ. ಕರ್ನಾಟಕ ರಾಜ್ಯ ಪರಿಸರ ಮಂಡಳಿಯ ಎಲ್ಲಾ ಪ್ರಾದೇಶಿಕ ಅಧಿಕಾರಿಗಳು.

   **ವಿವರಣೆ 1 –** ಕರ್ನಾಟಕ ರಾಜ್ಯ ಪರಿಸರ ಮಂಡಳಿಯು ಪ್ಲಾಸ್ಟಿಕ್ ತ್ಯಾಜ್ಯ (ಬಳಕೆ ಮತ್ತು ನಿರ್ವಹಣೆ) ನಿಯಮಗಳು 2011ರ ನಿಯಮ(4)ರ ಷರತ್ತು (ಎ)ನಲ್ಲಿ ಪಟ್ಟಿಮಾಡಲಾಗಿರುವ ಕಾರ್ಯಗಳನ್ನು ಜಾರಿಗೊಳಿಸುವ ಅಧಿಕಾರವನ್ನು ಹೊಂದಿದ್ದು ಇನ್ನುಳಿದ ಸ್ಥಳೀಯ ಸಂಸ್ಥೆಗಳು ನಿಯಮ(4)ರ ಷರತ್ತು (ಬಿ)ನಲ್ಲಿ ಪಟ್ಟಿಮಾಡಲಾಗಿರುವ ಕಾರ್ಯಗಳನ್ನು ನಿರ್ವಹಿಸುವ ಅಧಿಕಾರವನ್ನು ಹೊಂದಿರುತ್ತವೆ.

   **ವಿವರಣೆ 2 –** ಪರಿಸರ (ಸಂರಕ್ಷಣೆ) ಕಾಯಿದೆ, 1986ರ ಸೆಕ್ಷನ್ 19ರಡಿ ಭಾರತ ಸರ್ಕಾರವು ಹೊರಡಿಸಿರುವ ಅಧಿಸೂಚನೆ ಸಂ:ಎಸ್.ಒ.394(ಇ) ದಿನಾಂಕ:16.04.1987ರಲ್ಲಿ ಪಟ್ಟಿಮಾಡಲಾಗಿರುವ ಅಧಿಕಾರಿಗಳು ಸದರಿ ಅಧಿಸೂಚನೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ ದೂರುಗಳನ್ನು ದಾಖಲಿಸುವ ಅಧಿಕಾರವನ್ನು ಹೊಂದಿರುತ್ತಾರೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರು ಮತ್ತು ಆದೇಶದನ್ವಯ

**ಅಂದಾನಯ್ಯ ಮಠದ**
ಸರ್ಕಾರದ ಅಧೀನ ಕಾರ್ಯದರ್ಶಿ
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**FOREST, ECOLOGY AND ENVIRONMENT SECETARIAT**

**NOTIFICATION**

**No. FEE 17 EPC 2012, Bengaluru, Dated: 28.10.2015**

Whereas, plastic carry bags cause short term and long term environmental damage and health hazard:

And whereas, Article 48-A of the Constitution of India, inter alia, envisages that the State shall endeavor to protect and improve the environment:

And whereas, the Government of Karnataka is of the opinion that, the use of plastic carry bags, banners, buntings, flex, plastic flags, plastic plates, plastic cups, plastic sheets (for spreading on dining table), thermocol plates and cups used in functions is causing serious environmental hazards and affects health of human beings as well as animals;

And whereas, it is observed that the plastic wastes also causing blockage of gutters, sewers and drains, resulting in serious environmental problems;

And whereas, with a view to prevent the occurrence of such problems, the State Government has proposed to issue directions in exercise of the powers conferred under Section 5 of the Environment (Protection) Act, 1986, to impose ban on plastic carry bags, banners, buntings, flex, plastic flags, plastic plates, plastic cups and plastic sheets (for spreading on dining table) used in functions;

Wherefore the proposed Draft direction given below is issued in accordance with Rule 4 (3a) of the Environment (Protection) Rules, 1986.

Any person, institution, body interested in making any objection or suggestion on the direction contained in the Draft Notification may do so in writing within a period of **Thirty days** from the date of this Notification in Gazettee through post to the Secretary to Government (Environment and Ecology), Forest, Environment and Ecology Department, No. 709, 4th Gate, 7th Floor, Multistoried Building, Ambedkar Veedhi, Bengaluru – 560001. Further, notice is hereby given that the said direction will be given effect on or after the expiry of **Thirty days** from the date of publication of draft direction in Gazette or made available to the public.

**DRAFT DIRECTION**

1. No person including shopkeeper, vendor, wholesaler, retailer, trader, hawker or salesman etc., shall use plastic carry bags, banners, buntings, flex, plastic flags, plastic plates, plastic cups and plastic sheets (for spreading on dining table) used in functions for serving food items, irrespective of thickness. Further, no industry or person shall manufacture, supply, store, transport, sale and distribute plastic carry bags, banners, buntings, flex, plastic flags, plastic plates, plastic cups and plastic sheets (for spreading on dining table) used irrespective of thickness in the State of Karnataka from the date of publication of the directions through a Notification in the Gazette.

   Provided that plastic carry bags manufactured exclusively for export purposes against any export order shall be exempted in terms of rule 2 of the Plastic Waste (Management and Handling) Rules, 2011 from the application of this notification. Further provided that plastic bags or any plastic products used in nurseries, dairy industry, health sector and any other sector for non consumptive use shall be exempted from this notification.
2. That the following Officers shall enforce this direction in exercise of power conferred on them by law.
   a) Commissioner, Joint Commissioners, Deputy Commissioners and all public health officers of BBMP.
   b) All Deputy Commissioners of the districts
   c) All Commissioners and Chief Officers, and Health Officers and all members of local bodies in the state.
   d) All Regional Officers/Environmental officers of KSPCB.
   e) All Assistant Commissioners, Revenue Department.
   f) Tahshildars of all Taluks.
   g) Officers of Commercial Tax Department.
   h) Officers of Department of Food and Civil supplies.

3. That the following officers shall take cognizance of offences and initiate legal action in case of noncompliance of this direction as per the powers conferred on them under section 19 of the Environment (Protection) Act, 1986 and to book cases in the jurisdictional courts of law on all the violators.
   a) Secretary to Government (Environment & Ecology), Forest, Environment and Ecology Department.
   b) Chairman and Member Secretary, KSPCB.
   c) Deputy Commissioners of the Districts.
   d) Assistant Commissioner, Revenue Department.
   e) Regional Officers of KSPCB.

**Explanation 1-** Karnataka State Pollution Control Board shall be responsible for enforcement regarding the functions specified in clause (a) of rule 4 of the Plastic Waste (Management and Handling) Rules, 2011 and Urban Local Bodies shall be responsible for enforcement regarding the functions specified in clause (b) of rule 4 of the said Rules;

**Explanation 2-** Officers as mentioned in Government of India's Notification No.S.O.394 (E) dated 16.04.1987 issued under Section 19 of the Environment (Protection) Act, 1986 shall be authorized to file complaints relating to matters included in this Notification.

By Order & in the name of the Governor of Karnataka,

**Andanayya Mathad**
Under Secretary to Government,
(Ecology and Environment)
Forest, Ecology and Environment Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (100 ಪ್ರತಿಗಳು)

*RNI No. KARBIL/2001/47147*



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– ***IV-A*** | ಬೆಂಗಳೂರು, ಗುರುವಾರ, ಅಕ್ಟೋಬರ್ ೨೯, ೨೦೧೫ (ಕಾರ್ತೀಕ ೦೭, ಶಕ ವರ್ಷ ೧೯೩೭) | ನಂ. ೧೧೪೧ |
|---|---|---|
| ***Part– IV-A*** | ***Bengaluru, Thursday, October 29, 2015 (Kartheeka 07, Shaka Varsha 1937)*** | ***No. 1141*** |


**FOOD, CIVIL SUPPLIES, CONSUMER AFFAIRS AND LEGAL METROLOGY SECRETARIAT**
**CORRIGENDUM**

**No. FCS: 35: RPR: 2014, Bengaluru, Dated: 20.10.2015**

In Notification No.FCS 35 RPR 2014, dated:17.10.2015 issued under The Karnataka Essential Commodities Licensing Order 1986, imposing stock limits up to 30.09.2016, the Note "i)- **Licensing and Stock limits shall not apply to Retailers (Multiple Outlets) and Large Departmental Retailers"** in the said notification is withdrawn in respect of pulses from the date of this notification, as per the order No.S.O.2857(E) dated 18th October 2015 of the Ministry of Consumer Affairs, Food and Public Distribution, (Department of Consumer Affairs) Government of India, new Delhi.

By Order and in the name of the Governor of Karnataka,

**S.N. KRISHNAMURTHY**
Deputy Secretary to Government,
Food, Civil Supplies, Consumer Affairs
and Legal Metrology Department.

**FOOD, CIVIL SUPPLIES, CONSUMER AFFAIRS AND LEGAL METROLOGY SECRETARIAT**
**CORRIGENDUM**

**No. FCS: 35: RPR: 2014, Bengaluru, Dated: 17.10.2015**

In exercise of powers conferred by Section 3 of The Essential Commodities Act, 1955 (Central Act 10 of 1955) read with order No.S.O.4119 (E) dated 28th September 2015 of Ministry of Consumer Affairs, Food and Public Distribution, (Department of Consumer Affairs) Government of India, New Delhi, the Government of Karnataka hereby makes the following order further to amend The Karnataka Essential Commodities Licensing Order 1986 namely:-

1. **Short title and commencement: -**
   (1) This Order may be called The Karnataka Essential Commodities Licensing (Amendment) Order, 2015.
   (2) It shall come into force from the date of issue of this notification.
2. **Amendment of Schedule–II:** In Schedule – II of The Karnataka Essential Commodities Licensing Order, 1986 (hereinafter referred to as the said order:
   for serial number 1 and entries relating thereto, the following shall be inserted namely;
   **<u>Pulses, Edible oil and edible oil seeds</u>::** for a period up to 30.9.2016 as prescribed in Notification No.S.O.4119 (E) dt.28.09.2015 or till the Ministry of Consumer Affairs, Food & Public Distribution, (Department of Consumer Affairs), Government of India, New Delhi extends it from time to time;
3. **Substitution of Schedule IV:** For Schedule IV of The Karnataka Essential Commodities Licensing Order, 1986 (hereinafter referred to as the said order) the following shall be substituted namely:

**SCHEDULE - II**

(See first proviso to Clause 3)

| Sl.No. | Name of the Essential Commodities | Quantity prescribed | |
|---|---|---|---|
| | | **Retail** | **Wholesale** |
| 1 | Pulses | 5 Quintals. | 500 Quintals. |
| 2 | Edible Oil | 5 Quintals. | 400 Quintals. |
| 3 | Edible oil Seeds. | 5 Quintals. | 1000 Quintals. |

**SCHEDULE-IV**

(See third proviso to clause 3 )

| Sl. No. | Name of the Essential Commodity | Retail | Wholesale |
|---|---|---|---|
| 1 | Pulses. | 50 quintals. | 2000 quintals. |
| 2 | Edible Oils. | 50quintals. | 1200 quintals. |
| 3 | Edible oil seeds. | 50 quintals. | 2000 quintals. |
| 4 | Dal Mills. | 15 days Milling Capacity. | |
| 5 | Edible oil mills. | | |

| Quantity of un milled edible oilseeds | | Quantity of stock of milled stock of edible oils including refined oil | |
|---|---|---|---|
| (a) Producer who is carrying on business on the commencement of this order | (b) Producer who has commenced production after the commencement of this order. | (a) Producer who is carrying on business on the commencement of this order. | (b) Producer who has commenced production after the commencement of this order. |
| 2(a) | 2(b) | 3(a) | 3(b) |
| 1/8th of the maximum quantity of edible oilseeds used by him in any of the last three years | 1/8th of the annual installed capacity during the 1st year of operation and thereafter for next 2 years 1/8th of production during the previous years | 1/10th of the maximum production in any of the last three years. | 1/10th of the annual installed capacity during the 1st year of operation and thereafter for next 2 years 1/10th of the production during the previous year. |

**NOTE:**

i) Licensing and Stock limits shall not apply to Retailers (Multiple Outlets) and Large Departmental Retailers.

ii) The raw oils in process or in semi processed state and finished product shall be taken into consideration.

iii) Single retail outlet means: A retailer who runs only a single outlet.
Multiple retail outlet means: More than one retail outlet owned by a person and run under common trade name and style in the state.

iv) Wholesale includes godowns maintained by a owner running multiple retail outlets.

By Order and in the name of the Governor of Karnataka,

**S.N. KRISHNAMURTHY**
Deputy Secretary to Government,
Food, Civil Supplies, Consumer Affairs
and Legal Metrology Department.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (೨೦೦ ಪ್ರತಿಗಳು)

RNI No. KARBIL/2001/47147




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– **IV-A** | ಬೆಂಗಳೂರು, ಗುರುವಾರ, ಅಕ್ಟೋಬರ್ ೨೯, ೨೦೧೫ (ಕಾರ್ತೀಕ ೦೭, ಶಕ ವರ್ಷ ೧೯೩೭) | ನಂ. ೧೧೪೫ |
| ***Part– IV-A*** | ***Bengaluru, Thursday, October 29, 2015 (Kartheeka 07, Shaka Varsha 1937)*** | ***No. 1145*** |


### *CABINET AFFAIRS AND PERSONNEL AND ADMINISTRATIVE REFORMS SECRETARIAT*

### *NOTIFICATION*

***No. GS 64 GOB 2013, Bengaluru, dated : 29th October, 2015***

On the advice of Shri Siddaramaiah, Chief Minister of Karnataka and in exercise of the powers vested in me under Article 164(1) of the Constitution of India, I, ***VAJUBHAI VALA, Governor of Karnataka,*** do hereby appoint the following as Ministers in the Council of Ministers.

| *Sl. No.* | *Name of the Minister* | |
|---|---|---|
| *1* | ***Dr. G. Parameshwara, MLC*** | Cabinet Minister |
| *2* | ***Manohar H. Tahashildar, MLA*** | Cabinet Minister |
| *3* | ***Vinaya Kulkarni, MLA*** | Minister of State<br>Independent Charge |
| *4* | ***A. Manju, MLA*** | Minister of State<br>Independent Charge |

***VAJUBHAI VALA***
***GOVERNOR OF KARNATAKA***

By order and in the name of the Governor of Karnataka,

No. DCA 110 GAM 2013
Dated : 29th October, 2015

***JAYAVIBHAVA SWAMY***
Deputy Secretary to Government
D.C.A. & D.P.A.R. (State Protocol)

*RNI No. KARBIL/2001/47147*



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– ***IV-A*** | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೩೦, ೨೦೧೫ (ಕಾರ್ತೀಕ ೦೮, ಶಕ ವರ್ಷ ೧೯೩೭) | ನಂ. ೧೧೪೭ |
|---|---|---|
| ***Part– IV-A*** | ***Bengaluru, Friday, October 30, 2015 (Kartheeka 08, Shaka Varsha 1937)*** | ***No. 1147*** |


***CABINET AFFAIRS AND PERSONNEL AND ADMINISTRATIVE REFORMS SECRETARIAT***

**NOTIFICATION**

**No. GS 64 GOB 2013, 30th October, 2015**

In exercise of the powers conferred by clause (3) of the article 166 of the constitution of India, read with Rule (5) of the Karnataka Government (Transaction of Business) Rules, 1977 and in partial modification of the earlier notifications of even no. dated 19.5.2013, 21.7.2014, 26.2.2015 & 1.8.2015, **I, VAJUBHAI VALA, Governor of Karnataka**, on the advice of the Chief Minister, do hereby allocate with immediate effect, the business of Government, in so far as it relates to the following Ministers:

| Sl.No. | Name of the Ministers | Portfolio allocated |
|---|---|---|
| 1 | **Siddaramaiah**<br>Chief Minister | a) Department of Cabinet Affairs<br>Department of Personnel and Administrative Reforms<br>b) Department of Finance including Institutional Finance and Small Savings & Lotteries<br>c) Intelligence Wing from Home Department<br>d) Any other Department not specifically allocated. |
| 2 | **K.J. George**<br>Minister of Home | All subjects pertaining to Bangalore City, including BBMP, BDA, BWSSB, BMRDA, Directorate of Town Planning from Urban Development Department. |
| 3 | **T.B. Jayachandra**<br>Minister of Law, Parliamentary Affairs, Animal Husbandry and Muzrai | a) Law, Justice and Human Rights from Law Department<br>b) Parliamentary Affairs and Legislation from DPAL<br>c) Higher Education from Education Department |
| 4 | **Dr. G. Parameshwara**<br>Cabinet Minister | Home Department excluding Intelligence Wing |

| Sl.No. | Name of the Ministers | Portfolio allocated |
|---|---|---|
| 5 | **Vinay Kumar Sorake**<br>Minister of Urban Development | City Corporations excluding BBMP and subjects pertaining to Bangalore City, Urban Development Authorities excluding subjects pertaining to Bangalore, Directorate of Urban Land Transport, KUWS&DB and KUIDFC from Urban Development Department |
| 6 | **Manohar H. Tahashildar**<br>Cabinet Minister | a) Excise from Finance Department<br>b) Muzrai from Revenue Department |
| 7 | **Vinay Kulkarni**<br>Minister of State<br>Independent Charge | Mines and Geology from Commerce and Industries Department |
| 8 | **A. Manju**<br>Minister of State<br>Independent Charge | a) Animal Husbandry from Animal Husbandry and Fisheries Department<br>b) Sericulture from Horticulture Department |

***VAJUBHAI VALA***
***GOVERNOR OF KARNATAKA***

By order and in the name of the Governor of Karnataka,

***JAYAVIBHAVA SWAMY***
Deputy Secretary to Government
D.C.A. & D.P.A.R. (State Protocol)

No. DCA 110 GAM 2013
Dated : 30th October, 2015

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (300 ಪ್ರತಿಗಳು)

*RNI No. KARBIL/2001/47147*



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– *IV-A* | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೩೦, ೨೦೧೫ (ಕಾರ್ತೀಕ ೦೮, ಶಕ ವರ್ಷ ೧೯೩೭) | ನಂ. ೧೧೪೮ |
|---|---|---|
| ***Part– IV-A*** | ***Bengaluru, Friday, October 30, 2015 (Kartheeka 08, Shaka Varsha 1937)*** | ***No. 1148*** |

***CABINET AFFAIRS AND PERSONNEL AND ADMINISTRATIVE REFORMS SECRETARIAT***

**NOTIFICATION**

**No. GS 64 GOB 2013, 30th October, 2015**

As per the proposal of the Chief Minister vide letter No. PSCM/1250/2015 dated. 30.10.2015, the name of ' Shri Vinaya Kulkarni, MLA' appearing in this office Notification of even no. dated 29th October 2015 appointing four Ministers in the Council of Ministers should be read as ''Shri Vinay Kulkarni, MLA''.

***VAJUBHAI VALA***
***GOVERNOR OF KARNATAKA***

By order and in the name of the Governor of Karnataka,

***JAYAVIBHAVA SWAMY***
Deputy Secretary to Government
D.C.A. & D.P.A.R. (State Protocol)

No. DCA 110 GAM 2013
Dated : 30th October, 2015

*RNI No. KARBIL/2001/47147*



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ


| ಭಾಗ– *IV-A* | ಬೆಂಗಳೂರು, ಶನಿವಾರ, ಅಕ್ಟೋಬರ್ ೩೧, ೨೦೧೫ (ಕಾರ್ತೀಕ ೦೯, ಶಕ ವರ್ಷ ೧೯೩೭) | ನಂ. ೧೧೪೯ |
|---|---|---|
| ***Part– IV-A*** | ***Bengaluru, Saturday, October 31, 2015 (Kartheeka 09, Shaka Varsha 1937)*** | ***No. 1149*** |


**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಪಸಂಮೀ 68 ಪಪಾಯೋ 2011, ಬೆಂಗಳೂರು, ದಿನಾಂಕ: 26.10.2015**

ಸರ್ಕಾರದ ಅಧಿಸೂಚನೆ ಸಂಖ್ಯೆ: ಪಸಂಮೀ 68 ಪಪಾಯೋ 2011, ದಿನಾಂಕ: 05.02.2013 ರಲ್ಲಿ ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆಯ ಅಧಿನಿಯಮ 1964 (ಕರ್ನಾಟಕ ಅಧಿನಿಯಮ 1964 ರ 35) ರ 18 ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸರ್ಕಾರವು ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆ (ಗೋಸೇವಾ ಆಯೋಗದ ರಚನೆ) ನಿಯಮಗಳು–2012 ಅನ್ನು ಜಾರಿಗೊಳಿಸಲಾಗಿದೆ ಹಾಗೂ ಈ ನಿಯಮಗಳ ಮೇರೆಗೆ ಕರ್ನಾಟಕ ರಾಜ್ಯ ಗೋಸೇವಾ ಆಯೋಗವನ್ನು ರಚಿಸಲಾಗಿದೆ.

ಪ್ರಸ್ತುತ, ಸದರಿ ನಿಯಮಗಳ ನಿಯಮ 22(1) ರಲ್ಲಿ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, (ಕರ್ನಾಟಕ ಗೋವಧೆಯ ಪ್ರತಿಬಂಧಕ ಮತ್ತು ಜಾನುವಾರು ಸಂರಕ್ಷಣೆ ಗೋಸೇವಾ ಆಯೋಗದ ರಚನೆ ನಿಯಮಗಳು–2012) ಈ ನಿಯಮಗಳ ಮೇರೆಗೆ ರಚಿಸಲಾದ ಕರ್ನಾಟಕ ರಾಜ್ಯ ಗೋಸೇವಾ ಆಯೋಗವನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ (ದಿನಾಂಕ:26/10/2015) ರಿಂದ ಜಾರಿಗೆ ಬರುವಂತೆ ವಿಸರ್ಜಿಸಲಾಗಿದೆಯೆಂದು ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಎಸ್. ಸುದರ್ಶನ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ)

**ANIMAL HUSBANDRY & FISHERIES SECRETARIAT**

**NOTIFICATION**

**No. AHF 68 AHP 2011, Bengaluru, Dated 26.10.2015**

As per the notification No.AHF 68 AHP 2011 dated 05.02.2013, in exercise of the powers conferred by Section 18 of the Karnataka Prevention of Cow Slaughter and Cattle Preservation Act, 1964 (Karnataka Act 35 of 1964), Government has made Karnataka Prevention of Cow Slaughter and Cattle Preservation (Constitution of Goseva Ayog) Rules, 2012 and given effect to the said rules.

Now, in exercise of the powers conferred on Government as per Section 22 of the said rules, it is hereby declared that the Karnataka State Goseva Ayoga established as per Karnataka Prevention of Cow Slaughter and Cattle Preservation (Constitution of Goseva Ayog) Rules, 2012, is dissolved with immediate effect (with effect from 26-10-2015).

By order and in the name of Governor of Karnataka,

**D.S. SUDARSHAN KUMAR**
Under Secretary to Government
Animal Husbandry & Fisheries Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (200 ಪ್ರತಿಗಳು)

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ–V | ಬೆಂಗಳೂರು, ಶನಿವಾರ, ಅಕ್ಟೋಬರ್ ೧೭, ೨೦೧೫ (ಆಶ್ವಯುಜ ೨೫, ಶಕ ವರ್ಷ ೧೯೩೭) | ನಂ. ೧೧೧೭ |
|---|---|---|
| Part–V | Bengaluru, Saturday, October17, 2015 (Aashwayuja 25, Shaka Varsha 1937 | No. 1117 |



ಒಳಾಡಳಿತ ಸಚಿವಾಲಯ

ಸಂ. ಒಇ 237 ಪೊಸಇ 2015, ಬೆಂಗಳೂರು, ದಿನಾಂಕ : 17–10–2015

ಪೊಲೀಸ್ ಇಲಾಖೆ

**CRESIP-2015**

**(ISO: 9001-2008 ಪ್ರಮಾಣಿತ ನೇಮಕಾತಿ ಪ್ರಕ್ರಿಯೆ)**

**ಸಶಸ್ತ್ರ ಮೀಸಲು ಸಬ್–ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್) ಹುದ್ದೆಗಳ ನೇಮಕಾತಿ**

**ಅಧಿಸೂಚನೆ ಸಂಖ್ಯೆ. 18/ನೇಮಕಾತಿ–2/2015–16**

ವಿಷಯ: ಸಶಸ್ತ್ರ ಮೀಸಲು ಸಬ್–ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್) (ಪುರುಷ) ಹಾಗೂ ಸೇವೆಯಲ್ಲಿರುವವರು ಒಳಗೊಂಡಂತೆ ಖಾಲಿ ಹುದ್ದೆಗಳ ನೇರ ನೇಮಕಾತಿ ಕುರಿತು.

~*~*~*~

1. ಕರ್ನಾಟಕ ರಾಜ್ಯದ, ಪೊಲೀಸ್ ಇಲಾಖೆಯಲ್ಲಿ ಖಾಲಿ ಇರುವ ಸಶಸ್ತ್ರ ಮೀಸಲು ಸಬ್–ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್) (ಪುರುಷ) ಹಾಗೂ ಸೇವೆಯಲ್ಲಿರುವವರು ಒಳಗೊಂಡಂತೆ ಹುದ್ದೆಗಳ ನೇರ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ನೌಕರರ ಸೇವೆಗಳು ಸೇರಿದಂತೆ (ನೇಮಕಾತಿ) ನಿಯಮ 2004 ಮತ್ತು ಅದರ (ತಿದ್ದುಪಡಿ) ನಿಯಮ, 2009, ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳನ್ನು ಒಳಗೊಂಡ (ನೇಮಕಾತಿ) (ತಿದ್ದುಪಡಿ) ನಿಯಮಗಳು 2014, ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 ಹಾಗೂ ಮೇಲೆ ತಿಳಿಯಪಡಿಸಿದ ನಿಯಮಗಳಿಗೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ಈ ಅಧಿಸೂಚನೆಯನ್ನು ಪ್ರಕಟಿಸುತ್ತ ಅರ್ಹ ಅಭ್ಯರ್ಥಿಗಳಿಂದ ಆನ್–ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.**

**ವಿಶೇಷ ಸೂಚನೆ–**

**ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ಅಂಶಗಳು / ಮೀಸಲಾತಿಗಳನ್ನು ಆಧರಿಸಿ ನೇಮಕಾತಿ ಪ್ರಕ್ರಿಯೆಗೆ ಅವಕಾಶ ಕಲ್ಪಿಸುವುದರಿಂದ ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಯಾವುದೇ ಮಾಹಿತಿ / ಅಂಶ ಮೀಸಲಾತಿಯ ಬದಲಾವಣೆ ಕೋರಿ ಸಲ್ಲಿಸುವ ಮನವಿಯನ್ನು ಪರಿಗಣಿಸಲಾಗುವುದಿಲ್ಲ. ಆದ್ದರಿಂದ ಯಾವುದೇ ತಪ್ಪು / ಸುಳ್ಳು ಮಾಹಿತಿ ನೀಡದೆ ಸರಿಯಾದ ಮಾಹಿತಿ ನೀಡಿ ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸತಕ್ಕದ್ದು.**

**2. ಶುಲ್ಕ:**

| | |
|---|---|
| ಸಾಮಾನ್ಯ ವರ್ಗ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ₹250/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ | ₹.100/– |

1) ನಿಗದಿತ ಶುಲ್ಕವನ್ನು **ಎಸ್‌ಬಿಎಂ/ಎಸ್‌ಬಿಹೆಚ್** ಬ್ಯಾಂಕಿನ ಯಾವುದಾದರೂ ಶಾಖೆಗಳಲ್ಲಿ ಬ್ಯಾಂಕಿನ ವೇಳೆಯಲ್ಲಿ ಚಲನ್ ನೀಡಿ ಹಣ ಪಾವತಿಸಬಹುದು.

2) ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ನೀಡಲಾಗಿರುವ ಸೂಚನೆಗಳನ್ನು ಓದಿಕೊಂಡು ಯಾವುದೇ ತಪ್ಪು ಮಾಹಿತಿ ನೀಡದೆ ಆನ್–ಲೈನ್‌ನಲ್ಲಿ ಲಭ್ಯವಿರುವ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು.

ಟಿಪ್ಪಣಿ: ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ನಮೂದಿಸಿದಂತೆ ಅಭ್ಯರ್ಥಿಗೆ ಅನ್ವಯಿಸುವ ಒಟ್ಟು ಪರೀಕ್ಷಾ ಶುಲ್ಕವನ್ನು **ನಗದು ರೂಪದಲ್ಲಿ ಚಲನ್ ನೊಂದಿಗೆ ಮಾತ್ರ ಮೇಲೆ ನಮೂದಿಸಿರುವ ಬ್ಯಾಂಕ್‌ಗಳಲ್ಲಿ** ಪಾವತಿಸತಕ್ಕದ್ದು. **ಡಿಡಿ, ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.**

**3. ಆನ್–ಲೈನ್ (On-line) ಮುಖಾಂತರ ಅರ್ಜಿ ಸಲ್ಲಿಸುವ ಹಾಗೂ ಶುಲ್ಕ ಪಾವತಿಸುವ ವಿಧಾನ :**

ಅರ್ಜಿದಾರ ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ನೀಡಲಾಗಿರುವ ಮಾಹಿತಿಸೂಚಿ / ಸೂಚನೆಗಳನ್ನು ಜಾಗರೂಕತೆಯಿಂದ ಓದಿಕೊಂಡು ಭರ್ತಿ ಮಾಡಬೇಕು. ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿನ Current Recruitment ನಲ್ಲಿ ನೀಡಲಾಗಿರುವ ಸೂಚನೆಗಳನ್ನು ಓದಿಕೊಂಡು ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಆನ್–ಲೈನ್‌ನಲ್ಲಿ ಲಭ್ಯವಿರುವ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದ್ದಲ್ಲಿ ಅಂತಹವರ ವಿರುದ್ಧ ಕಾನೂನಿನನ್ವಯ ನೇಮಕಾತಿ ಸಮಿತಿಯು ಸೂಕ್ತ ಕ್ರಮ ಕೈಗೊಳ್ಳುವುದು. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅರ್ಜಿದಾರ ಒಂದು ಬಿಳಿ ಹಾಳೆಯ ಮೇಲೆ ಪಾಸ್‌ಪೋರ್ಟ್ ಅಳತೆಯ ಬಣ್ಣದ ಭಾವಚಿತ್ರವನ್ನು ಮತ್ತು ಸಹಿಯನ್ನು ಪ್ರತ್ಯೇಕವಾಗಿ (Soft Copy - less than 250 KB) ಸ್ಕ್ಯಾನ್ ಮಾಡಿಟ್ಟುಕೊಂಡಿರಬೇಕು. ನಂತರ ಅರ್ಜಿದಾರನ ಹೆಸರು, ಜಾತಿ, ಪ್ರವರ್ಗ, ಮೀಸಲಾತಿಗಳ ವಿವರ, ಹುಟ್ಟಿದ ದಿನಾಂಕ, ವಿದ್ಯಾರ್ಹತೆ ಮತ್ತು ಇತ್ಯಾದಿ ವಿವರಗಳನ್ನು ಭರ್ತಿ ಮಾಡಿ ಕೊನೆಯದಾಗಿ ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಭಾವಚಿತ್ರ ಮತ್ತು ಸಹಿಯನ್ನು ಕಂಪ್ಯೂಟರ್ ಮುಖೇನ ಅಪ್‌ಲೋಡ್ (Upload) ಮಾಡಬೇಕು. ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅರ್ಜಿದಾರ ನೀಡಿರುವ ವಿವರಗಳು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿದ್ದಲ್ಲಿ ಮಾತ್ರ ಚಲನ್ ಮುದ್ರಿಸಬಹುದು. ಚಲನ್ ಮುದ್ರಿಸಲು ಜನರೇಟ್ ಚಲನ್ ಬಟನ್ ಮೇಲೆ ಕ್ಲಿಕ್ ಮಾಡಿದಾಗ ತ್ರಿಪ್ರತಿ (Triplicate) ಬ್ಯಾಂಕ್ ಚಲನ್ ಸೃಜನೆಯಾಗುತ್ತದೆ. ಆ ಚಲನ್‌ನಲ್ಲಿ ಅರ್ಜಿಯ ಸಂಖ್ಯೆಯೊಂದಿಗೆ, ಆಯ್ಕೆ ಮಾಡಿರುವ ಘಟಕ, ನಿಮ್ಮ ಭಾವಚಿತ್ರ, ಪ್ರವರ್ಗ, ಮೀಸಲಾತಿಗಳ ವಿವರ ಮತ್ತು ಪಾವತಿಸಬೇಕಾಗಿರುವ ನಿಗದಿತ ಶುಲ್ಕಗಳ ವಿವರಗಳು ಇರುತ್ತವೆ. ಆ ಚಲನ್ ಪ್ರತಿಯನ್ನು ಮುದ್ರಿಸಿ/ಪ್ರಿಂಟ್ ಮಾಡಿಕೊಳ್ಳತಕ್ಕದ್ದು.

ನಂತರ ಅರ್ಜಿದಾರ ಮುದ್ರಿಸಿಕೊಳ್ಳಲಾದ ಚಲನ್‌ನಲ್ಲಿ ನಮೂದಾಗಿರುವ ಒಟ್ಟು ಶುಲ್ಕವನ್ನು ನಗದು ರೂಪದಲ್ಲಿಯೇ **ಎಸ್.ಬಿ.ಎಂ ಅಥವಾ ಎಸ್.ಬಿ.ಹೆಚ್‌ನ** ಅಧಿಕೃತ ಬ್ಯಾಂಕ್ ಶಾಖೆಗಳಲ್ಲಿ ಪಾವತಿಸಬೇಕು. ಶುಲ್ಕ ಪಾವತಿಸಿದ ನಂತರ ಚಲನ್‌ನ 'ಅಭ್ಯರ್ಥಿ ಪ್ರತಿ'ಯನ್ನು ಇಟ್ಟುಕೊಂಡಿರತಕ್ಕದು.

ಅಭ್ಯರ್ಥಿಯು ಶುಲ್ಕ ಪಾವತಿಸಿದ ಎರಡು ದಿನಗಳ ನಂತರ ಪುನಃ ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ My Application ನ್ನು ಕ್ಲಿಕ್ ಮಾಡಿ, ತಮ್ಮ ಅರ್ಜಿ ಸಂಖ್ಯೆ ಮತ್ತು ಜನ್ಮ ದಿನಾಂಕ ನಮೂದಿಸಿದ ನಂತರ ಅರ್ಜಿ ತೆರೆಯುತ್ತದೆ ಹಾಗೂ ಅಭ್ಯರ್ಥಿಯು ಭರ್ತಿ ಮಾಡಿರುವ ಎಲ್ಲಾ ವಿವರಗಳನ್ನು ಒಳಗೊಂಡಂತೆ ಅರ್ಜಿಯು ಸೃಜನೆಯಾಗುತ್ತದೆ, ಸದರಿ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು. ಅರ್ಜಿ ಪ್ರತಿ ಮತ್ತು ಅರ್ಜಿ ಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ.

**ಪ್ರಮುಖ ದಿನಾಂಕಗಳ ಮಾಹಿತಿ:**

- **ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 26.10.2015 ಬೆಳಿಗ್ಗೆ 10.00 ಗಂಟೆಗೆ**
- **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 24.11.2015 ಸಂಜೆ 06.00 ಗಂಟೆಗೆ**
- **ಶುಲ್ಕವನ್ನು ಅಧಿಕೃತ ಬ್ಯಾಂಕ್ ಕಛೇರಿ ವೇಳೆಯಲ್ಲಿ ಪಾವತಿಸಲು ಕೊನೆಯ ದಿನಾಂಕ: 25.11.2015.**

**ಸೂಚನೆ:**

- ಪೊಲೀಸ್ ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ನಿಗದಿತ ದಿನಾಂಕದೊಳಗೆ ಭರ್ತಿ ಮಾಡಿ ಸಲ್ಲಿಸಿರುವಂತ ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು.
- ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದ್ದಲ್ಲಿ ಅಂತಹವರ ವಿರುದ್ಧ ಕಾನೂನಿನನ್ವಯ ನೇಮಕಾತಿ ಸಮಿತಿಯು ಸೂಕ್ತ ಕ್ರಮ ಕೈಗೊಳ್ಳುವುದು.
- ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 080–22943346 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು. ಹಾಗೂ ತಾಂತ್ರಿಕ ತೊಂದರೆ ಎದುರಾದಲ್ಲಿ ಅದನ್ನು ಸ್ಥಗಿತಗೊಳಿಸಿ ಮತ್ತೊಮ್ಮೆ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ಭರ್ತಿ ಮಾಡಲು ತಿಳಿಸಲಾಗಿದೆ.

**ಟಿಪ್ಪಣಿ: ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆಯು ತಾತ್ಕಾಲಿಕವಾಗಿದ್ದು, ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

**2) ಸಶಸ್ತ್ರ ಮೀಸಲು ಸಬ್–ಇನ್ಸ್‌ಪೆಕ್ಟರ್ (ಆರ್‌ಎಸ್‌ಐ) (ಸಿಎಆರ್/ಡಿಎಆರ್) (ಪುರುಷ) ಖಾಲಿ ಹುದ್ದೆಗಳ ವಿವರ:**

| | |
|---|---|
| ಅ) ಸಶಸ್ತ್ರ ಮೀಸಲು ಸಬ್‌ಇನ್ಸ್‌ಪೆಕ್ಟರ್ (ಪುರುಷ) | 48 |
| ಆ) ಸಶಸ್ತ್ರ ಮೀಸಲು ಸಬ್‌ಇನ್ಸ್‌ಪೆಕ್ಟರ್ ಸೇವೆಯಲ್ಲಿರುವವರಿಗೆ | 03 |
| **ಒಟ್ಟು** | **= 51** |

**ಟಿಪ್ಪಣಿ: ಮೇಲ್ಕಂಡ ಹುದ್ದೆಗಳ ಆಯುಕ್ತರ/ವಲಯ ಕಛೇರಿಗಳ ವರ್ಗೀಕರಣವನ್ನು ಅನುಬಂಧ–'ಎ' ನಲ್ಲಿ ಮತ್ತು ಕ್ರೂಢೀಕೃತ ವರ್ಗೀಕರಣವನ್ನು ಅನುಬಂಧ–'ಬಿ' ನಲ್ಲಿ ಈ ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.**

**4. ಅರ್ಹತಾ ಷರತ್ತುಗಳು:**

i) ಭಾರತೀಯ ನಾಗರಿಕನಾಗಿರತಕ್ಕದ್ದು.

ii) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ, ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

iii) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**5. ವಯೋಮಿತಿ :**

ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 24.11.2015ಕ್ಕೆ ಅಭ್ಯರ್ಥಿಗೆ ಕನಿಷ್ಟ 21 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 28 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ 26 ವರ್ಷಗಳು.

**ಸೇವಾನಿರತ ಅಭ್ಯರ್ಥಿಗಳಿಗೆ:**

ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 24.11.2015ಕ್ಕೆ ಅಭ್ಯರ್ಥಿಗೆ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 40 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ 35 ವರ್ಷಗಳು.

***ಸೇವಾನಿರತ ಅಭ್ಯರ್ಥಿ:**

ಪೊಲೀಸ್ ಇಲಾಖೆಯ ಯಾವುದೇ ವೃಂದದಲ್ಲಿ ಸಹಾಯಕ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ / ಹೆಡ್ ಕಾನ್ಸ್‌ಟೇಬಲ್ / ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕನಿಷ್ಟ 5 ವರ್ಷಗಳ ಸೇವೆಯನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಅಂದರೆ 24.11.2015ಕ್ಕೆ ಪೂರ್ಣಗೊಳಿಸಿರಬೇಕು ಹಾಗೂ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಪೊಲೀಸ್ ಇಲಾಖೆಯಲ್ಲಿನ ಮೇಲ್ಕಂಡ ವೃಂದಗಳಲ್ಲಿ ಸೇವೆ ಸಲ್ಲಿಸುತ್ತಿರಬೇಕು.

**ಮಾಜಿ ಸೈನಿಕ ಅಭ್ಯರ್ಥಿಗಳಿಗೆ:**

ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ **"ಅವರು ಸೇವೆ ಸಲ್ಲಿಸಿದ ಅವಧಿ"** ಯ ಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

i) **ಮಾಜಿ ಸೈನಿಕರ ಬಗ್ಗೆ ವಿವರಣೆ:**

ಮಾಜಿ ಸೈನಿಕ ಎಂದರೆ ಸಶಸ್ತ್ರ ಸೇನೆಗಳಾದ ನಿಯಮಿತ ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಯಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್ (Defence Security Corps), ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್ (General Reserved Engineering Force), ಲೋಕ್ ಸಹಾಯಕ್ ಸೇನಾ (Lok Sahayak Sena) ಮತ್ತು ಪ್ಯಾರಾ ಮಿಲಿಟರಿ ಪಡೆ (Para Military Forces)/ Central Police Organisation ಯಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:** ವ್ಯಕ್ತಿಗಳು ಕೇಂದ್ರ ಸಶಸ್ತ್ರಸೇನೆಗಳ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರಿಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

ii) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ.36034/27/84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ 02.05.1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ.ಒಇ/90/ಪೊಸಿಅ/2005, ದಿನಾಂಕ 02.02.2006ರ ಪತ್ರದಲ್ಲಿ ದಿನಾಂಕ 02.05.1985ರ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. ಈ ವಿಷಯದ ಕುರಿತು ವೃಂದ ಮತ್ತು ನೇಮಕಾತಿ ನಿಯಮವಾದ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳು ಸೇರಿದಂತೆ (ನೇಮಕಾತಿ) (ತಿದ್ದುಪಡಿ) ನಿಯಮ, 2009 ರಲ್ಲಿಯೂ ಸಹ ನಿಗದಿಪಡಿಸಲಾಗಿದೆ. ಆದ್ದರಿಂದ ಒಂದು ಬಾರಿ ಮಾಜಿ ಸೈನಿಕ ಮೀಸಲಾತಿಯನ್ನು ಉಪಯೋಗಿಸಿ ಸರ್ಕಾರಿ ಹುದ್ದೆಗೆ ಆಯ್ಕೆಯಾದ ಮಾಜಿ ಸೈನಿಕರು ಮತ್ತೊಮ್ಮೆ ಸದರಿ ಮೀಸಲಾತಿಯನ್ನು ಕೋರಲು ಬರುವುದಿಲ್ಲ. ಅಂತಹ ಮಾಜಿ ಸೈನಿಕ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. **(ಈ ಕಾರಣದಿಂದ ಮಾಜಿ ಸೈನಿಕರು ಕಡ್ಡಾಯವಾಗಿ ಅರ್ಜಿಯಲ್ಲಿ ನಿಗದಿಪಡಿಸಲಾಗಿರುವ ಕಾಲಂನ್ನು ಭರ್ತಿ ಮಾಡತಕ್ಕದ್ದು ಹಾಗೂ ಭೂಸೇನೆ/ನೌಕಾಸೇನೆ/ವಾಯು ಸೇನೆಯಲ್ಲಿ ಸೇವೆ ಸಲ್ಲಿಸಿದಷ್ಟು ಅವಧಿಯನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು)**

iii) ಈ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಅಭ್ಯರ್ಥಿಯು ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿ ಸೇರಿದ ಬಗ್ಗೆ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ / ಪೊಲೀಸ್ ಕಮೀಷನರ್ ಕಛೇರಿಗೆ ಮಾಹಿತಿ ನೀಡತಕ್ಕದ್ದು. ಮಾಹಿತಿ ನೀಡದೆ ತದನಂತರ ತಿಳಿದುಬಂದಲ್ಲಿ ಅಂತಹ ಮಾಜಿ ಸೈನಿಕ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

iv) ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

v) ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮ 9(1) ರನ್ವಯ ಕೇಂದ್ರ ಸಶಸ್ತ್ರಸೇನೆಯಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ, ಸಹಿಷ್ಣುತೆ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ. ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರಸೇನೆಯ ಅಧಿಕಾರಿಗಳಿಂದ ಅವಲಂಬಿತ ಪ್ರಮಾಣ ಪತ್ರ ಮತ್ತು ಸೈನಿಕ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

**ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೇ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.

**6. ವಿದ್ಯಾರ್ಹತೆ:**

ಯು.ಜಿ.ಸಿ. ಇಂದ ಮಾನ್ಯತೆ ಪಡೆದಿರುವ ಅಂಗೀಕೃತ ವಿಶ್ವವಿದ್ಯಾಲಯದಲ್ಲಿ ಪದವಿ ಅಥವಾ ತತ್ಸಮಾನ ಪದವಿಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ, ಅಂದರೆ 24.11.2015ಕ್ಕೆ ಹೊಂದಿರಬೇಕು. (ಮಾಜಿ ಸೈನಿಕ ಅಭ್ಯರ್ಥಿಗಳು ಸೈನ್ಯದಲ್ಲಿ ನೀಡಿದ ಪದವಿ ಪ್ರಮಾಣ ಪತ್ರವನ್ನು ದಿನಾಂಕ: 24.11.2015 ರೊಳಗೆ ಪಡೆದಿದ್ದರೆ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು).

**ಸೇವಾನಿರತ ಅಭ್ಯರ್ಥಿಗಳಿಗೆ ವಿದ್ಯಾರ್ಹತೆ ಮತ್ತು ಅನುಭವ :** ಅಂಗೀಕೃತ ವಿಶ್ವವಿದ್ಯಾಲಯದಲ್ಲಿ ಪದವಿ ಅಥವಾ ತತ್ಸಮಾನ ಪದವಿ ಜೊತೆಯಲ್ಲಿ ಪೊಲೀಸ್ ಇಲಾಖೆಯ ಯಾವುದೇ ವೃಂದದಲ್ಲಿ 5 ವರ್ಷಗಳ ಕನಿಷ್ಠ ಸೇವೆಯನ್ನು (ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಅಂದರೆ 24.11.2015ಕ್ಕೆ ಹೊಂದಿರಬೇಕು) ಸಹಾಯಕ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ / ಹೆಡ್ ಕಾನ್ಸ್‌ಟೇಬಲ್ / ಪೊಲೀಸ್ ಕಾನ್ಸ್‌ಟೇಬಲ್ ಆಗಿ ಪೂರ್ಣಗೊಳಿಸಿರಬೇಕು ಹಾಗೂ ಹಾಲಿ ಪೊಲೀಸ್ ಇಲಾಖೆಯಲ್ಲಿ ಮೇಲಿನ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರಬೇಕು, (ಸೇವಾನಿರತ ಅಭ್ಯರ್ಥಿಗಳು ಅಧಿಸೂಚನೆಯ ಪುಟ ಸಂಖ್ಯೆ 24 ಮತ್ತು 25 ರಲ್ಲಿರುವ ಅನುಬಂಧ–'ಎ' & 'ಬಿ' ಯನ್ನು ಕಡ್ಡಾಯವಾಗಿ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ಅಂದರೆ 24.11.2015 ರೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು).

**ಟಿಪ್ಪಣಿ:**

i) ಮೇಲೆ ನಮೂದಿಸಿರುವ ವಿದ್ಯಾರ್ಹತೆ ಹಾಗೂ ಅನುಭವವನ್ನು ಹೊಂದದೇ ಇರುವ ಅಭ್ಯರ್ಥಿಗಳು ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದು, ನಂತರ ನಿಗದಿಪಡಿಸಲಾದ ವಿದ್ಯಾರ್ಹತೆ ಮತ್ತು ಅನುಭವವನ್ನು ಹಾಗೂ ಅಂಕಪಟ್ಟಿ ಹೊಂದಿರುವುದಿಲ್ಲವೆಂದು ನೇಮಕಾತಿ ಸಮಿತಿಗೆ ಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಯಾವುದೇ ಹಂತದಲ್ಲಾದರೂ ರದ್ದುಪಡಿಸಲಾಗುವುದು.

ii) ಡಿಪ್ಲೊಮಾ ಇತ್ಯಾದಿ ವಿದ್ಯಾರ್ಹತೆಗಳು ಪದವಿಗೆ ಸಮಾನವಾಗುವುದಿಲ್ಲ. ಆದ್ದರಿಂದ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಹುದ್ದೆಗೆ ಈ ವಿದ್ಯಾರ್ಹತೆಯ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ.

iii) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆಯಾದ ಪದವಿಯನ್ನು ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಹಾಗೂ ಅಂಕಪಟ್ಟಿ ಇಲ್ಲದೆ ಇರುವ ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸಲು ಅರ್ಹರಾಗಿರುವುದಿಲ್ಲ. ಮೇಲಿನ ವಿದ್ಯಾರ್ಹತೆಯನ್ನು ಹೊರತುಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನೂ ಪರಿಗಣಿಸಲಾಗುವುದಿಲ್ಲ.

## 7. ತರಬೇತಿ, ಖಾಯಂಪೂರ್ವ ಅವಧಿ ಮತ್ತು ವೇತನ ಶ್ರೇಣಿ :

**ಎ) ತರಬೇತಿ:**

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಅಥವಾ ಪೊಲೀಸ್ ತರಬೇತಿ ಕೇಂದ್ರ, ಕಲಬುರಗಿ ಅಥವಾ ಪೊಲೀಸ್ ಇಲಾಖೆಯು ತೀರ್ಮಾನಿಸಿದ ಇತರೆ ತರಬೇತಿ ಕೇಂದ್ರದಲ್ಲಿ ಹನ್ನೆರಡು ತಿಂಗಳ ತರಬೇತಿಯನ್ನು ಪಡೆಯಬೇಕಾಗಿದ್ದು, ತರಬೇತಿಯ ಕೊನೆಯಲ್ಲಿ ನಿಗದಿತ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

**ಬಿ) ಖಾಯಂಪೂರ್ವ ಅವಧಿ:**

ಮೂಲ ತರಬೇತಿ ಮತ್ತು ಪ್ರಾಯೋಗಿಕ ತರಬೇತಿ ಸೇರಿದಂತೆ ಎರಡು ವರ್ಷ ಆರು ತಿಂಗಳು.

**ಸಿ) ವೇತನ ಶ್ರೇಣಿ:**

₹. 20000–500–21000–600–24600–700–28800–800–33600–900–36300

**ಡಿ) ಪಿಂಚಣಿ ಸೌಲಭ್ಯ :**

ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006 ರಂತೆ ನೂತನ ಅಂಶದಾಯಿ ಪಿಂಚಣಿ ಸೌಲಭ್ಯ ಅನ್ವಯವಾಗುವುದು.

## 8. ಸಹಿಷ್ಣುತೆ ಪರೀಕ್ಷೆ (Endurance Test) (ಇಟಿ) ಮತ್ತು ದೇಹದಾರ್ಢ್ಯತೆ ಪರೀಕ್ಷೆ (Physical Standard Test) (ಪಿಎಸ್‌ಟಿ) :

**ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳದ ಮಾಹಿತಿಯನ್ನು ಒಳಗೊಂಡ ಕರೆ ಪತ್ರಗಳನ್ನು ಪೊಲೀಸ್ ಇಲಾಖೆಯ ವೆಬ್‌ಸೈಟ್ "http://www.ksp.gov.in" ನಲ್ಲಿ ಅಪ್‌ಲೋಡ್ ಮಾಡಲಾಗುವುದು. ಅಭ್ಯರ್ಥಿಯು ತನ್ನ ಕರೆ ಪತ್ರವನ್ನು ಪೊಲೀಸ್ ಇಲಾಖೆಯ ವೆಬ್‌ಸೈಟ್‌ನಿಂದ ಡೌನ್‌ಲೋಡ್ ಮಾಡಿಕೊಳ್ಳಬೇಕು. ಅಭ್ಯರ್ಥಿಗಳಿಗೆ ಕರೆ ಪತ್ರಗಳನ್ನು ಅಂಚೆ ಮೂಲಕ ರವಾನಿಸಲಾಗುವುದಿಲ್ಲ. ಆದ್ದರಿಂದ ಅಭ್ಯರ್ಥಿಗಳು ಇಲಾಖೆಯ ವೆಬ್‌ಸೈಟ್‌ನ್ನು ಮೇಲಿಂದ ಮೇಲೆ ವೀಕ್ಷಿಸುತ್ತಿರಬೇಕು. ಕರೆ ಪತ್ರವಿಲ್ಲದೆ ಹಾಜರಾಗುವ ಅಭ್ಯರ್ಥಿಗಳಿಗೆ ಇ.ಟಿ. ಮತ್ತು ಪಿ.ಎಸ್.ಟಿ. ಪರಿಕ್ಷೆಗಳಿಗೆ ಅನುವು ಮಾಡಲಾಗುವುದಿಲ್ಲ.**

**ಎ) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಆಯ್ಕೆ ಸಮಿತಿಯು ನಿಗದಿಪಡಿಸಿದ ಕೇಂದ್ರಗಳಲ್ಲಿ ನಡೆಸಲಾಗುವುದು.**
ಆಯ್ಕೆ ಸಮಿತಿಯು ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ ಇದನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ತಿಳಿಸಲಾಗುವುದು. ಎಲ್ಲಿಯೇ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ನಡೆಸಿದರೂ ಅಭ್ಯರ್ಥಿಗಳು ಸದರಿ ಪರೀಕ್ಷೆಗೆ ಹಾಜರಾಗತಕ್ಕದ್ದು, ಇಲ್ಲದಿದ್ದಲ್ಲಿ ಗೈರುಹಾಜರು/ಅನರ್ಹಗೊಳಿಸಲಾಗುವುದು.

**ಬಿ) ಒಂದಕ್ಕಿಂತ ಹೆಚ್ಚು ಅರ್ಜಿ ಸಲ್ಲಿಸಿ ಒಂದಕ್ಕಿಂತ ಹೆಚ್ಚು ಕಡೆಗಳಲ್ಲಿ ದೈಹಿಕ ಪರೀಕ್ಷೆಗಳಿಗೆ ಹಾಜರಾದರೆ, ಅಂತಹ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. (ವಿಶೇಷ ಸೂಚನೆಗಳು 18(ಸಿ)ನ್ನು ನೋಡಿ) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.**

**ಸಿ) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗಳನ್ನು ಹಾಗೂ ಲಿಖಿತ ಪರೀಕ್ಷೆಯನ್ನು ಈ ಕೆಳಕಂಡ ಕೇಂದ್ರಗಳಲ್ಲಿ ನಡೆಸಲಾಗುವುದು.**

| ಕ್ರ.ಸಂ. | **ಸಹಿಷ್ಣುತೆ ಪರೀಕ್ಷೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ಕೇಂದ್ರಗಳು** | **ಲಿಖಿತ ಪರೀಕ್ಷೆಯ ಕೇಂದ್ರಗಳು** |
|---|---|---|
| 1 | ಬೆಂಗಳೂರು | ಬೆಂಗಳೂರು |
| 2 | ಮೈಸೂರು | ಮೈಸೂರು |
| 3 | ಹುಬ್ಬಳ್ಳಿ–ಧಾರವಾಡ | ಹುಬ್ಬಳ್ಳಿ–ಧಾರವಾಡ |
| 4 | ಮಂಗಳೂರು | ಮಂಗಳೂರು |
| 5 | ಬೆಳಗಾವಿ | ಬೆಳಗಾವಿ |
| 6 | ದಾವಣಗೆರೆ | ದಾವಣಗೆರೆ |
| 7 | ಕಲಬುರಗಿ | ಕಲಬುರಗಿ |

ಡಿ) **ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ದಿನಾಂಕ ಮತ್ತು ಸಮಯದ ಮಾಹಿತಿಯನ್ನು ಒಳಗೊಂಡ ಕರೆ ಪತ್ರಗಳನ್ನು ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ಪ್ರಕಟಿಸಲಾಗುವುದರಿಂದ** ಅಭ್ಯರ್ಥಿಗಳು ಸದರಿ ವೆಬ್‌ಸೈಟ್‌ನಿಂದ ಕರೆ ಪತ್ರಗಳನ್ನು ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು (Download). ಈ ಸಂಬಂಧ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.inನ್ನು ದಿನನಿತ್ಯ ಗಮನಿಸುತ್ತಿರುವುದು ಸೂಕ್ತ. ದೈಹಿಕ ಪರೀಕ್ಷೆಯು ನಡೆಯುವ ಸಮಯ ಮತ್ತು ಸ್ಥಳವನ್ನು ಸಂಬಂಧಪಟ್ಟ ದೈಹಿಕ ಪರೀಕ್ಷೆಯ ಕೇಂದ್ರದ ಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು. ಕರೆ ಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ದೈಹಿಕ ಪರೀಕ್ಷೆಯಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದಿಲ್ಲ.

ಅಭ್ಯರ್ಥಿಗಳು ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗೆ ಹಾಜರಾಗುವಾಗ, ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು ಮತ್ತು ಅದರ ಒಂದು ದೃಢೀಕೃತ ಪ್ರತಿಯನ್ನು ನೀಡುವುದು.

i) ಪಾಸ್‌ಪೋರ್ಟ್ (Passport)
ii) ಚಾಲನಾ ಪರವಾನಗಿ ಪತ್ರ (Driving License)
iii) ಪ್ಯಾನ್ ಕಾರ್ಡ್ (PAN Card)
iv) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)
v) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph)
vi) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)
vii) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Community Certificate with Photo)
viii) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವ ಆದೇಶ (Ex-servicemen's pension book/pension payment order)
ix) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards with Photograph)
x) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).
xi) ಭಾರತೀಯ ಗುರುತು ಪ್ರಾಧಿಕಾರದಿಂದ ನೀಡಲಾಗಿರುವ ಆಧಾರ್ ಕಾರ್ಡ್.( AADHAR CARD).

ಇ) ಕರೆಪತ್ರದ ಜೊತೆಗೆ ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ಸಹ ತರತಕ್ಕದ್ದು, ತಪ್ಪಿದ್ದಲ್ಲಿ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ. ನಿಗದಿತ ದಿನಾಂಕ ಹಾಗೂ ಸಮಯದಲ್ಲಿ ಹಾಜರಾಗದಿದ್ದರೆ ಅಂತಹವರನ್ನು ಅನರ್ಹ ಗೊಳಿಸಲಾಗುವುದು ಹಾಗೂ ಬದಲಿ ದಿನಾಂಕವನ್ನು ನೀಡಲಾಗುವುದಿಲ್ಲ.

ಇ) **ಸಹಿಷ್ಣುತೆ ಪರೀಕ್ಷೆ : (Endurance Test)**

i) ದೇಹದಾರ್ಡ್ಯತೆ ಪರೀಕ್ಷೆಗೆ ಅರ್ಹರಾಗಲು ಅಭ್ಯರ್ಥಿಗಳು ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಹಾಗೂ ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳನ್ನು ಕೆಳಗೆ ನಮೂದಿಸಿರುವ ಕ್ರಮದಲ್ಲಿಯೇ ಭಾಗವಹಿಸುವುದು ಕಡ್ಡಾಯವಾಗಿರುತ್ತದೆ. ಈ ಪರೀಕ್ಷೆಗಳಲ್ಲಿ ಭಾಗವಹಿಸದೆ ತಿರಸ್ಕರಿಸುವವರು/ ವಿಫಲವಾಗುವರು, ಅನರ್ಹತೆಗೆ ಒಳಗಾಗುವರು. ಪ್ರತಿಯೊಂದು ಸಹಿಷ್ಣುತೆ ಪರೀಕ್ಷೆ ಮುಗಿದ ನಂತರ ನಿಗದಿತ ನಮೂನೆಗೆ ಅಭ್ಯರ್ಥಿಯು ಭರ್ತಿ ಮಾಡಿರುವ ವಿವರಗಳನ್ನು ಪರಿಶೀಲಿಸಿ ಸಹಿ ಹಾಕಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಯು ಅನರ್ಹತೆಗೊಳಗಾಗುವನು. ಸಹಿಷ್ಣುತೆ ಪರೀಕ್ಷೆಗೆ ಅಂಕಗಳನ್ನು ನೀಡಲಾಗುವುದಿಲ್ಲ. ಇವು ಕೇವಲ ಅರ್ಹತೆಗೆ ಮಾತ್ರ ಸೀಮಿತವಾಗಿರುತ್ತವೆ.

ii) ಅಭ್ಯರ್ಥಿಗಳು 1600 ಮೀಟರ್ ಓಟವನ್ನು 6 ನಿಮಿಷ 30 ಸೆಕೆಂಡ್‌ಗಳೊಗಾಗಿ ಹಾಗೂ ಸೇವಾನಿರತ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳು 400 ಮೀಟರ್ ಓಟವನ್ನು 2 ನಿಮಿಷದೊಳಗಾಗಿ ಪೂರ್ಣಗೊಳಿಸಿದರೆ ಮಾತ್ರ ಮುಂದಿನ ಸಹಿಷ್ಣುತೆ ಪರೀಕ್ಷೆಗೆ ಅರ್ಹಗೊಳ್ಳುವರು. ಇಲ್ಲದಿದ್ದಲ್ಲಿ ಅಂತಹ ಅಭ್ಯರ್ಥಿಗಳನ್ನು ಆ ಹಂತದಲ್ಲಿಯೇ ಅನರ್ಹಗೊಳಿಸಲಾಗುವುದು.

iii) ಸಹಿಷ್ಣುತೆ ಪರೀಕ್ಷೆಯಲ್ಲಿ ಎತ್ತರ ಜಿಗಿತ ಅಥವಾ ಉದ್ದ ಜಿಗಿತ ಹಾಗೂ ಗುಂಡೆಸತದಲ್ಲಿ ಮಾತ್ರ ಮೂರು ಅವಕಾಶಗಳನ್ನು ನೀಡಲಾಗುವುದು. ಮೂರು ಅವಕಾಶಗಳಲ್ಲಿ ಉತ್ತಮವಾದ ಒಂದನ್ನು ಮಾತ್ರ ಗಣನೆಗೆ ತೆಗೆದು ಕೊಳ್ಳಲಾಗುವುದು.

**ಎಲ್ಲಾ ಸಾಮಾನ್ಯ ಪುರುಷ ಅಭ್ಯರ್ಥಿಗಳಿಗೆ (ಸೇವಾನಿರತ/ಮಾಜಿ ಸೈನಿಕರನ್ನು ಹೊರತುಪಡಿಸಿ)**

| ಅಂಶಗಳು | ಅರ್ಹತಾ ವೇಳೆ |
|---|---|
| 1600 ಮೀಟರ್ ಓಟ | 6 ನಿಮಿಷ 30 ಸೆಕೆಂಡ್ ಮೀರದಂತೆ |
| ಉದ್ದ ಜಿಗಿತ<br>ಅಥವಾ<br>ಎತ್ತರ ಜಿಗಿತ | 3.80 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ)<br>ಅಥವಾ<br>1.20 ಮೀಟರ್‌ಗಿಂತ ಕಡಿಮೆ ಇಲ್ಲದಂತೆ |
| ಗುಂಡು ಎಸೆತ (7.26 ಕೆ.ಜಿ.) | 5.60 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |

**ಸೇವಾನಿರತ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಈ ಕೆಳಕಂಡ ಸಹಿಷ್ಣುತೆ ಪರೀಕ್ಷೆಯನ್ನು ನಡೆಸಲಾಗುವುದು**

| ಅಂಶಗಳು | ಅರ್ಹತಾ ವೇಳೆ |
|---|---|
| 400 ಮೀಟರ್ ಓಟ | 2 ನಿಮಿಷ ಮೀರದಂತೆ |
| ಉದ್ದ ಜಿಗಿತ<br>ಅಥವಾ<br>ಎತ್ತರ ಜಿಗಿತ | 2.50 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ)<br>ಅಥವಾ<br>0.90 ಮೀಟರ್‌ಗಿಂತ ಕಡಿಮೆ ಇಲ್ಲದಂತೆ |
| ಗುಂಡು ಎಸೆತ (4 ಕೆ.ಜಿ.) | 3.75 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |

**ಎಫ್) ದೇಹದಾರ್ಡ್ಯತೆ ಪರೀಕ್ಷೆ** : (ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹಗೊಂಡ ಅಭ್ಯರ್ಥಿಗಳಿಗೆ ಮಾತ್ರ)

**ಎಲ್ಲಾ ನೇರ ಅಭ್ಯರ್ಥಿಗಳಿಗೆ, ಸೇವಾನಿರತ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅನ್ವಯಿಸುವಂತೆ**

ಎತ್ತರ : ಕನಿಷ್ಠ 168 ಸೆಂ.ಮೀ.

ಎದೆ ಸುತ್ತಳತೆ : 86 ಸೆಂ.ಮೀ. (ಪೂರ್ತಿ ವಿಸ್ತರಿಸಿದಾಗ) ಕನಿಷ್ಠ ವಿಸ್ತರಣೆ 5 ಸೆಂ.ಮೀ.

**ವಿಶೇಷ ಸೂಚನೆ :–**

**ಸಹಿಷ್ಣುತೆ ಪರೀಕ್ಷೆಗೆ ಹಾಜರಾಗುವ ಮುನ್ನ ಅಭ್ಯರ್ಥಿಗಳು ದೈಹಿಕವಾಗಿ ಸದೃಢರಿರಬೇಕು. ಈ ಪರೀಕ್ಷೆಗಳ ಸಂದರ್ಭದಲ್ಲಿ ಸಂಭವಿಸುವ ಯಾವುದೇ ರೀತಿಯ ಅನಾಹುತ / ತೊಂದರೆಗಳಿಗೆ ಪೊಲೀಸ್ ಇಲಾಖೆ/ ನೇಮಕಾತಿ ಸಮಿತಿಯವರು ಜವಾಬ್ದಾರರಾಗಿರುವುದಿಲ್ಲ. ಅಭ್ಯರ್ಥಿಗಳು ಅವರ ಸ್ವಂತ ಹಿತದೃಷ್ಟಿಯಿಂದ ಅವರ ದೇಹದ ವೈದ್ಯಕೀಯ ಪರೀಕ್ಷೆಯನ್ನು ಮಾಡಿಸಿಕೊಂಡು, ಅಭ್ಯರ್ಥಿಯ ಆರೋಗ್ಯವು ಎಲ್ಲ ರೀತಿಯಿಂದಲೂ ಸದೃಢವಾಗಿದೆ ಎಂದು ಖಚಿತ ಪಡಿಸಿಕೊಂಡು ಇಲಾಖೆ ನಡೆಸುವ ಸಹಿಷ್ಣುತೆ ಮತ್ತು ದೇಹದಾರ್ಡ್ಯತೆ ಪರೀಕ್ಷೆಗೆ ಎಲ್ಲ ವಿಧದಿಂದಲೂ ಅರ್ಹನೆಂದು**

**ಮುಂಚಿತವಾಗಿಯೇ ತಿಳಿದುಕೊಂಡು ಹಾಜರಾಗತಕ್ಕದ್ದು. ಈ ದಿಸೆಯಲ್ಲಿ ಕನಿಷ್ಠ ಒಂದು ತಿಂಗಳ ಮುಂಚೆಯಿಂದಲೇ ಸಹಿಷ್ಣುತೆ ಪರೀಕ್ಷೆಗೆ ಅಭ್ಯರ್ಥಿಗಳು ಸಾಕಷ್ಟು ಅಭ್ಯಾಸ ಮಾಡಿಕೊಳ್ಳತಕ್ಕದ್ದು.**

ಟಿಪ್ಪಣಿ :

i) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಒಂದು ದೈಹಿಕ ಪರೀಕ್ಷೆಯ ಸಮಿತಿಯು ನಡೆಸುತ್ತದೆ. ಯಾವುದೇ ಇತರೆ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಪರಿಗಣಿಸಲಾಗುವುದಿಲ್ಲ ದೈಹಿಕ ಪರೀಕ್ಷೆಯ ಸಮಿತಿಯು ನೀಡುವ ಫಲಿತಾಂಶವೇ ಅಂತಿಮವಾಗಿರುತ್ತದೆ.

ii) ಸಹಿಷ್ಣತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆ ಪೂರ್ಣಗೊಂಡ ನಂತರ ಅಭ್ಯರ್ಥಿಗಳು ದೈಹಿಕ ಪರೀಕ್ಷೆ ಸಮಿತಿ ಸಮ್ಮುಖದಲ್ಲಿ ನಿಗದಿತ ನಮೂನೆಗೆ ಸಹಿ ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು. ಇಲ್ಲವಾದರೆ ಅಂತಹವರನ್ನು ಅನರ್ಹರೆಂದು ಪರಿಗಣಿಸಲಾಗುವುದು.

iii) ಅಭ್ಯರ್ಥಿಗಳು ಸಹಿಷ್ಣುತೆ ಪರೀಕ್ಷೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹಗೊಂಡಲ್ಲಿ ಮಾತ್ರ ಲಿಖಿತ ಪರೀಕ್ಷೆಗೆ ಅರ್ಹಗೊಳ್ಳುವರು.

iv) ನಿಗದಿಪಡಿಸಿರುವ ಕನಿಷ್ಠ ಎತ್ತರ 168 ಸೆಂ.ಮೀ. ಹೊಂದಿರುವ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಿಲ್ಲದೆ ಇರುವ ಪಕ್ಷದಲ್ಲಿ ಕಡಿಮೆ ಎತ್ತರ ಹೊಂದಿರುವ ಮಾಜಿ ಸೈನಿಕ ಅಭ್ಯರ್ಥಿಗಳನ್ನು ಸಹ ಅರ್ಹತೆಗೆ ಅನುಗುಣವಾಗಿ ಅಂತಿಮ ಆಯ್ಕೆಗೆ ಪರಿಗಣಿಸಲಾಗುವುದು.

v) ದೇಹದಾರ್ಢ್ಯತೆ ಪರೀಕ್ಷೆಯ ಎತ್ತರ ಹಾಗೂ ತೂಕವನ್ನು ( ಯಂತ್ರದಿಂದ ಪಡೆಯಲಾಗುವುದು.

vi) ಪಾರದರ್ಶಕತೆಗಾಗಿ ಮೇಲೆ ಹೇಳಿದ ಎಲ್ಲಾ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ವೀಡಿಯೋಗ್ರಫಿ ಮಾಡಲಾಗುವುದು.

**9. <u>ಲಿಖಿತ ಪರೀಕ್ಷೆ:</u>**

ಎ) **ಅಭ್ಯರ್ಥಿಯು ಸಹಿಷ್ಣುತೆ ಹಾಗೂ ದೇಹದಾರ್ಢ್ಯತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾದರೆ ಮಾತ್ರ ಲಿಖಿತ ಪರೀಕ್ಷೆಗೆ ಕರೆಯಲಾಗುವುದು.** ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯನ್ನು 7 (ಏಳು) ಕೇಂದ್ರದಲ್ಲಿ ನಡೆಸಲಾಗುವುದು ಅಂದರೆ : ಬೆಂಗಳೂರು, ಮೈಸೂರು, ದಾವಣಗೆರೆ, ಬೆಳಗಾವಿ, ಕಲಬುರಗಿ, ಹುಬ್ಬಳ್ಳಿ–ದಾರವಾಢ ಮತ್ತು ಮಂಗಳೂರು (ಮುಖ್ಯ ಪ್ಯಾರಾ 8 (ಸಿ) ರಲ್ಲಿ ಸೂಚಿಸಿರುವ ಲಿಖಿತ ಪರೀಕ್ಷಾ ಕೇಂದ್ರಗಳು). ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.

ಬಿ) **ಅಭ್ಯರ್ಥಿಗಳು ಲಿಖಿತ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳದ ಮಾಹಿತಿಯನ್ನು ಹೊಂದಿರುವ** ಕರೆಪತ್ರವನ್ನು ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.in ನಿಂದ ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು (Download). ಖುದ್ದಾಗಿ ಯಾವುದೇ ಅಭ್ಯರ್ಥಿಗಳಿಗೆ ಕರೆ ಪತ್ರಗಳನ್ನು ಕಳುಹಿಸಲಾಗುವುದಿಲ್ಲ. ಈ ಸಂಬಂಧ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.in ನ್ನು ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ. ಲಿಖಿತ ಪರೀಕ್ಷೆಯು ನಡೆಯುವ ವೇಳೆ ಮತ್ತು ಸ್ಥಳವನ್ನು ಸಂಬಂಧಪಟ್ಟ ಲಿಖಿತ ಪರೀಕ್ಷೆಯ ಕೇಂದ್ರದ ಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು. ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ಲಿಖಿತ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ. ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಹಾಜರಾಗುವಾಗ ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

i) ಪಾಸ್‌ಪೋರ್ಟ್ (Passport)

ii) ಚಾಲನಾ ಪರವಾನಗಿ ಪತ್ರ (Driving License)

iii) ಪ್ಯಾನ್ ಕಾರ್ಡ್ (PAN Card)

iv) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)

v) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph)

vi) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)

vii) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Community Certificate with Photo)

viii) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವ ಆದೇಶ (Ex-servicemen’s pension book/pension payment order)

ix) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards with Photograph)

x) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).

xi) ಭಾರತೀಯ ಗುರುತು ಪ್ರಾಧಿಕಾರದಿಂದ ನೀಡಲಾಗಿರುವ ಆಧಾರ್ ಕಾರ್ಡ್.( AADHAR CARD).

ಸಿ) ಲಿಖಿತ ಪರೀಕ್ಷೆಗೆ ತರಬೇಕಾದ ದಾಖಲಾತಿಗಳು i) ಲಿಖಿತ ಪರೀಕ್ಷೆಯ ಕರೆಪತ್ರ, ii) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ಫಲಿತಾಂಶ ಹಾಳೆ, iii) ಗುರುತಿನ ಚೀಟಿ, iv) ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿ ತರತಕ್ಕದ್ದು. ತಪ್ಪಿದ್ದಲ್ಲಿ ಲಿಖಿತ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ.

ಡಿ) **ಲಿಖಿತ ಪರೀಕ್ಷೆಯು ಪದವಿ ಮಟ್ಟದ ಎರಡು ಪತ್ರಿಕೆಗಳದ್ದಾಗಿರುತ್ತದೆ.**

**ಪತ್ರಿಕೆ–1** : ಈ ಪ್ರಶ್ನೆ ಪತ್ರಿಕೆಯಲ್ಲಿ ಪ್ರಬಂಧ ಬರಹ, ಸಾರಾಂಶ ಬರಹ, ಭಾಷಾಂತರ ಪ್ರಶ್ನೆಗಳು ಇರುತ್ತವೆ. ಪ್ರಬಂಧ ಬರಹದಲ್ಲಿ 600 ಶಬ್ದಗಳ ಮಿತಿಯನ್ನು ಮೀರಬಾರದು. ಪ್ರಬಂಧದ ಜೊತೆ ಸಾರಾಂಶ ಬರಹ (Precis) ಪ್ರಶ್ನೆಯನ್ನೂ ಕೊಡಲಾಗುವುದು. ಈ ಪೇಪರ್‌ಗೆ ಕೊಡುವ ಉತ್ತರ ಪತ್ರಿಕೆಯಲ್ಲಿ ಕೇವಲ 10 ಪುಟಗಳು ಮಾತ್ರ ಇರುತ್ತವೆ. ಅಭ್ಯರ್ಥಿಗಳು 10 ಪುಟಗಳು ಮೀರದಂತೆ ಉತ್ತರಿಸತಕ್ಕದ್ದು ಹಾಗೂ ಅತಿರಿಕ್ತ ಉತ್ತರ ಪತ್ರಿಕೆಗಳನ್ನು ಕೊಡಲಾಗುವುದಿಲ್ಲ. ಈ ಪರೀಕ್ಷೆಯ ಅವಧಿ ಒಂದು ಗಂಟೆ ಮೂವತ್ತು ನಿಮಿಷಗಳಾಗಿದ್ದು, 50 ಅಂಕಗಳನ್ನು ಹೊಂದಿರುತ್ತದೆ. (20 ಅಂಕಗಳು ಪ್ರಬಂಧಕ್ಕೆ, 10 ಅಂಕಗಳು ಸಾರಾಂಶ ಬರಹಕ್ಕೆ ಹಾಗೂ 20 ಅಂಕಗಳು ಕನ್ನಡದಿಂದ ಇಂಗ್ಲೀಷ್‌ಗೆ ಮತ್ತು ಇಂಗ್ಲೀಷ್‌ನಿಂದ ಕನ್ನಡ ಭಾಷಾಂತರಕ್ಕೆ) ಇದರಲ್ಲಿ ಕನಿಷ್ಟ ಅಂಕಗಳು ಇರುವುದಿಲ್ಲ.

ii) **ಪತ್ರಿಕೆ–2** : ಈ ಪ್ರಶ್ನೆ ಪತ್ರಿಕೆಯು ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮದಲ್ಲಿದ್ದು, 150 ಅಂಕಗಳಿಗೆ ವಸ್ತುನಿಷ್ಠ (ಆಬ್ಜೆಕ್ಟೀವ್) ಮಾದರಿಯದಾಗಿದ್ದು, ಬಹುವಿಧ ಆಯ್ಕೆ (Multiple Choice) ಉತ್ತರಗಳ ಲಿಖಿತ ಪರೀಕ್ಷೆ ಇರುತ್ತದೆ. ಇವುಗಳನ್ನು ಉತ್ತರಿಸಲು ಒಂದು ಗಂಟೆ ಮೂವತ್ತು ನಿಮಿಷ ಸಮಯ ನೀಡಲಾಗುತ್ತದೆ. ಈ ಪ್ರಶ್ನೆ ಪತ್ರಿಕೆಯಲ್ಲಿ ಅಭ್ಯರ್ಥಿಯ ಮಾನಸಿಕ ಸಾಮರ್ಥ್ಯವನ್ನು ಅಳೆಯಲಾಗುವುದು. ಪ್ರಶ್ನೆ ಪತ್ತಿಕೆಯಲ್ಲಿ ಪ್ರಚಲಿತ ವಿದ್ಯಮಾನಗಳು, ಸಾಮಾನ್ಯ ಜ್ಞಾನವನ್ನೊಳಗೊಂಡ ಸಾಮಾನ್ಯ ಅಧ್ಯಯನ, ಭಾರತದ ಸ್ವಾತಂತ್ರ್ಯ ಸಂಗ್ರಾಮ, ಭಾರತೀಯ ಸಂವಿಧಾನ, ಇತಿಹಾಸ, ಭೂಗೋಳ, ವಿಜ್ಞಾನ, ಕಲೆ, ಸಾಹಿತ್ಯ, ಮಾನಸಿಕ ಸಾಮರ್ಥ್ಯ ಮತ್ತು ನೀತಿ ಶಿಕ್ಷಣ ಇತ್ಯಾದಿಗಳ ಬಗ್ಗೆ ಪ್ರಶ್ನೆಗಳು ಇರುತ್ತವೆ. ಪ್ರತಿ ತಪ್ಪು ಉತ್ತರಕ್ಕೆ ಅಂತಹುದೇ ಪ್ರಶ್ನೆಯ ಸರಿ ಉತ್ತರದ 25% (.375) ರಷ್ಟು ಅಂಕಗಳನ್ನು ಕಳೆಯಲಾಗುವುದು. ಅಭ್ಯರ್ಥಿಗಳು ಎರಡು ಪತ್ರಿಕೆಗಳಿಗೂ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

ಈ) **ಸೂಚನೆ:**

i) ಅ) ಅಭ್ಯರ್ಥಿಗಳು ಪತ್ರಿಕೆ–1 ನ್ನು ಇಂಗ್ಲೀಷ್ ಅಥವಾ ಕನ್ನಡದಲ್ಲಿ ಉತ್ತರಿಸಬಹುದು.

ಆ) ಪ್ರಶ್ನೆ ಪತ್ರಿಕೆ–2 ವಸ್ತುನಿಷ್ಠ (ಆಬ್ಜೆಕ್ಟೀವ್) ಮಾದರಿಯದ್ದಾಗಿರುತ್ತದೆ.

ಇ) ಪ್ರಶ್ನೆ ಪತ್ರಿಕೆ–2ರ ಉತ್ತರಗಳನ್ನು ಓ.ಎಂ.ಆರ್ ಶೀಟ್‌ನಲ್ಲಿ **ಕಪ್ಪು/ ನೀಲಿ** ಬಣ್ಣದ ಬಾಲ್‌ಪಾಯಿಂಟ್ ಪೆನ್ನಿನಿಂದ ಮಾತ್ರ ಗುರುತಿಸಬೇಕಾಗುತ್ತದೆ. ನಿಗದಿತ ಜಾಗದಲ್ಲಿ ಅಭ್ಯರ್ಥಿಯು ಪ್ರಶ್ನೆ ಪತ್ರಿಕೆಯ ಶ್ರೇಣಿ (ಎ,ಬಿ,ಸಿ ಇತ್ಯಾದಿ), ಅರ್ಜಿ ಸಂಖ್ಯೆ. ರೋಲ್ ನಂಬರ್ ಮತ್ತು ಸಹಿಯನ್ನು ತಪ್ಪದೇ ಮಾಡಬೇಕು. ಇದನ್ನು ಭರ್ತಿ ಮಾಡದಿದ್ದರೆ ಉತ್ತರಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ ಹಾಗೂ ಅಭ್ಯರ್ಥಿಯು ಆಯ್ಕೆಗೆ ಅನರ್ಹನಾಗುತ್ತಾನೆ. ಆದ್ದರಿಂದ ಅಭ್ಯರ್ಥಿಯು ಸರಿಯಾಗಿ ಮಾಹಿತಿಯನ್ನು ಭರ್ತಿ ಮಾಡಬೇಕು.

ಈ) ಅಭ್ಯರ್ಥಿಗಳು ಅರ್ಜಿ ಸಂಖ್ಯೆ. ರೋಲ್ ನಂಬರ್ ಇತ್ಯಾದಿ ಭರ್ತಿ ಮಾಡಿದ ನಂತರ ನಿಗದಿತ ಜಾಗದಲ್ಲಿ ತಪ್ಪದೇ ಸಹಿ ಮಾಡಬೇಕು ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು ಇಲ್ಲವಾದಲ್ಲಿ ಅಂತಹ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

ಉ) ಅರ್ಜಿ ಸಂಖ್ಯೆ, ರೋಲ್ ನಂ, ಪ್ರಶ್ನೆ ಪತ್ರಿಕೆ ಶ್ರೇಣಿ ಇತ್ಯಾದಿಗಳನ್ನು ಉತ್ತರ ಪತ್ರಿಕೆಗಳಲ್ಲಿ ಭರ್ತಿ ಮಾಡದೆ ಪರೀಕ್ಷೆ ಮುಗಿದ ನಂತರ ಅದನ್ನು ಪರಿಗಣಿಸುವಂತೆ ಕೋರಿ ಮನವಿ ಸಲ್ಲಿಸಿದಲ್ಲಿ ಅಂತಹ ಮನವಿಯನ್ನು ಪರಿಗಣಿಸಲಾಗುವುದಿಲ್ಲ.

ii) ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಯಲ್ಲಿ ಹಾಜರಿರತಕ್ಕದ್ದು, ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಉತ್ತರ ಪತ್ರಿಕೆಯಲ್ಲಿ ಅರ್ಜಿ ಸಂಖ್ಯೆ, ನೊಂದಣಿ ಸಂಖ್ಯೆ, ಪ್ರಶ್ನೆ ಪತ್ರಿಕೆ ಶ್ರೇಣಿ, ಸಹಿ, ಎಡಗೈ ಹೆಬ್ಬೆಟ್ಟಿನ ಗುರುತು ಮಾಡುವ ಬಗ್ಗೆ ಕೆಲವು ಮಾರ್ಗ ಸೂಚನೆಗಳನ್ನು ನೀಡುವರು.

iii) ನೇಮಕಾತಿ ಸಮಿತಿಯು ನಡೆಸುವ ಯಾವುದೇ ಪರೀಕ್ಷೆಗಳಲ್ಲಿ ಅನುಚಿತವಾಗಿ ವರ್ತಿಸಿದರೆ ಅಥವಾ ನಕಲು ಮಾಡಿದ್ದು ಕಂಡು ಬಂದರೆ ಅಥವಾ ನಕಲು ಮಾಡುವ ಸಾಮಗ್ರಿಯನ್ನು ಹೊಂದಿದ್ದರೆ, ಅಂತಹ ಅಭ್ಯರ್ಥಿಗಳನ್ನು 3 ವರ್ಷಗಳ ಕಾಲ ಡಿಬಾರ್ ಮಾಡಲಾಗುವುದು.

